ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ

ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಗುರುವಾರ, ದಿನಾಂಕ : 10 ನೇ ಡಿಸೆಂಬರ್, 2020

2019-20ನೇ ಸಾಲಿನ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಅನುದಾನದ ಕುರಿತು

ಶ್ರೀ ಕೆ. ವಿ. ನಾರಾಯಣಸ್ವಾಮಿ(ವಿಧಾನಸಭೆಯಿಂದ ಚುನಾಯಿತರಾದವರು) –

388 (456) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) 2019-20ನೇ ಸಾಲಿನಲ್ಲಿ ಮೈಸೂರು ಜಿಲ್ಲೆಯಲ್ಲಿ, ಮಾನ್ಯ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ ಶಾಸಕರು ನೀಡಿರುವ ಕ್ರಿಯಾ ಯೋಜನೆ ಪಟ್ಟಿಯಲ್ಲಿರುವ ಎಲ್ಲಾ ಕಾಮಗಾರಿಗಳಿಗೆ ಸರ್ಕಾರ ಈಗಾಗಲೇ ಸೂಚಿಸಿರುವಂತೆ ಕಾರ್ಯಾದೇಶ ನೀಡಿ ಅನುದಾನ ಬಿಡುಗಡೆಗೊಳಿಸಲಾಗಿದೆಯೇ;

(ಆ) ಮೈಸೂರು ಜಿಲ್ಲೆಯನ್ನು ನೋಡಲ್ ಜಿಲ್ಲೆಯಾಗಿ ಆಯ್ಕೆ ಮಾಡಿಕೊಂಡಿರುವ ಪ್ರತಿಯೊಬ್ಬ ಶಾಸಕರು 2019-20ನೇ ಸಾಲಿಗೆ ಎಷ್ಟು ಮೊತ್ತದ ಕಾಮಗಾರಿಗಳಿಗಾಗಿ ಪತ್ರ ನೀಡಿರುತ್ತಾರೆ; (ಪ್ರತಿಯೊಬ್ಬ ಶಾಸಕರ ಕ್ರಿಯಾ ಯೋಜನೆಯ ಮೊತ್ತ ಪ್ರತ್ಯೇಕವಾಗಿ ನೀಡುವುದು)

(ಇ) 2019-20ನೇ ಸಾಲಿನಲ್ಲಿ ಪ್ರತಿಯೊಬ್ಬ ಶಾಸಕರು ಸೂಚಿಸಿರುವ ಕಾಮಗಾರಿಗಳಿಗೆ ಇದುವರೆಗೆ ಎಷ್ಟು ಮೊತ್ತವನ್ನು ಬಿಡುಗಡೆ ಮಾಡಲಾಗಿದೆ? (ಪ್ರತಿಯೊಬ್ಬ ಶಾಸಕರಿಗೆ ಇದುವರೆಗೆ ನೀಡಿರುವ ಅನುದಾನದ ಮೊತ್ತವನ್ನು ಪ್ರತ್ಯೇಕವಾಗಿ ನೀಡುವುದು)